**ಅಧಿಸೂಚನೆ**

**ಸಂಖ್ಯೆ: ಸಿಆಸುಇ 92 ಆಸೇವ 2008, ಬೆಂಗಳೂರು, ದಿನಾಂಕ: 12ನೇ ಜೂನ್ 2008**

ಶ್ರೀ ಎಂ.ಆರ್. ರವಿ. ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಪ್ರಸ್ತುತ ಉಪವಿಭಾಗಾಧಿಕಾರಿ, ಹುಣಸೂರು ಉಪವಿಭಾಗ ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಿ ಮಾನ್ಯ ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಗೆ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 710

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 101 ಸೇಇಮು 2008, ಬೆಂಗಳೂರು, ದಿನಾಂಕ: 10ನೇ ಜೂನ್ 2008**

ದಿನಾಂಕ: 30–4–2008 ರಂದು 58 ವರ್ಷಗಳ ವಯೋಮಿತಿ ತಲುಪಿ ನಿವೃತ್ತಿ ಹೊಂದಿರುವ ಡಾ: ಬಿ.ಎಸ್. ಪ್ರೇಮಲೀಲಾ , ನಿವೃತ್ತ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರಿಗೆ ಸರ್ಕಾರದ ಸುತ್ತೋಲೆ ಸಂ. ಆಇ 15 ಎಸ್‌ಆರ್‌ಎಸ್ 97 ದಿ:20–9–1997 ರನ್ವಯ ನಿವೃತ್ತಿ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯನ್ನು 240 ದಿನಗಳ ಗರಿಷ್ಠ ಮಿತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 118–ಎ(1) ರಡಿ ಹಾಗೂ ಉಪನಿಯಮ (4) ರ ವ್ಯಾಪ್ತಿಗೊಳಪಟ್ಟು ನಗಧಿಕರಣಗೊಳಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 711

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 501 ಸಅಸೇ 2008, ಬೆಂಗಳೂರು, ದಿನಾಂಕ: 10ನೇ ಜೂನ್ 2008**

ಶ್ರೀ ಪುಟ್ಟೇಗೌಡ, ಆಪ್ತ ಕಾರ್ಯದರ್ಶಿ ಗ್ರೇಡ್–2, ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಇವರ ಆಪ್ತ ಶಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮುಖ್ಯಮಂತ್ರಿಯವರ ಉಪ ಕಾರ್ಯದರ್ಶಿಯವರ ಆಪ್ತ ಶಾಖೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 712

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 352 ಸಅಸೇ 2008(ಭಾಗ), ಬೆಂಗಳೂರು, ದಿನಾಂಕ: 11ನೇ ಜೂನ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಈ ಕೆಳಕಂಡಂತೆ ಕಾನೂನು ಕೋಶದ ಮುಖ್ಯಸ್ಥರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರ.ಸಂ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಸ್ಥಳ ನಿಯುಕ್ತಿಗೊಳಿಸಿದ/ಹೆಚ್ಚುವರಿ ಪ್ರಭಾರದಲ್ಲಿ ಇಡಲಾದ ಹುದ್ದೆ:ಇಲಾಖೆ |
|---|---|---|
| 1 | ಶ್ರೀ ಜಗದೀಶ ಎಸ್. ಚಿಕ್ಕಣ್ಣನವರ್<br>ಕಾನೂನು ಕೋಶದ ಮುಖ್ಯಸ್ಥರು<br>ಇಂಧನ, ವಸತಿ, ನಗರಾಭಿವೃದ್ಧಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ವಾದೇಕ್ಷಕರು, ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ<br>ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ–ಶ್ರೀಮತಿ ಕೋಮಲತ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ |

| ಕ್ರ.ಸಂ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಸ್ಥಳ ನಿಯುಕ್ತಿಗೊಳಿಸಿದ/ಹೆಚ್ಚುವರಿ ಪ್ರಭಾರದಲ್ಲಿ ಇಡಲಾದ ಹುದ್ದೆ:ಇಲಾಖೆ |
|---|---|---|
| 2 | ಶ್ರೀಮತಿ ನಾಗರತ್ನ<br>ಕಾನೂನು ಕೋಶದ ಮುಖ್ಯಸ್ಥರು<br>ಒಳಾಡಳಿತ ಮತ್ತು ಸಾರಿಗೆ ಯುವಜನ ಸೇವೆ, ಸಹಕಾರ ಕೃಷಿ ಮತ್ತು ತೋಟಗಾರಿಕೆ ಪಶು ಸಂಗೋಪನೆ ಮತ್ತು ಮೀನುಗಾರಿಕೆ ಯೋಜನೆ ಮತ್ತು ಸಾಂಖ್ಯಿಕ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಶ್ರೀ ಜಗದೀಶ್ ಎಸ್. ಚಿಕ್ಕಣ್ಣನವರ್ ಇವರ ಅಧೀನದಲ್ಲಿದ್ದ ಇಂಧನ, ವಸತಿ, ನಗರಾಭಿವೃದ್ಧಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗಳಿಗೆ ಹೆಚ್ಚುವರಿ ಪ್ರಭಾರದಲ್ಲಿರಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 713

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 493 ಸಅಸೇ 2008, ಬೆಂಗಳೂರು, ದಿನಾಂಕ: 10ನೇ ಜೂನ್ 2008**

ಶ್ರೀ ಜಿ.ಎಲ್. ಜೀರೆ, ಕಾರ್ಯಕಾರಿ, ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಅವರನ್ನು ಕರ್ನಾಟಕ ಸರ್ಕಾರದ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 493 ಸಅಸೇ 2008, ದಿನಾಂಕ:10–6–2008ರಲ್ಲಿ ಸೃಜಿಸಲಾದ ವಿಶೇಷ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಇವರ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 714

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 93 ಆಸೇವ 2008, ಬೆಂಗಳೂರು, ದಿನಾಂಕ: 12ನೇ ಜೂನ್ 2008**

ಶ್ರೀ ಕೆ.ವಿ. ನಂಜುಂಡೇಗೌಡ ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ, ಪ್ರಸ್ತುತ ಅಪರ ನಿರ್ದೇಶಕರು (ಕಾನೂನು ಜಾರಿ) ರೇಷ್ಮೆ ಇಲಾಖೆ, ಬೆಂಗಳೂರು ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಿ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಆಪ್ತಕಾರ್ಯದರ್ಶಿ ಹುದ್ದೆಗೆ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 715

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 492 ಸಅಸೇ 2008, ಬೆಂಗಳೂರು, ದಿನಾಂಕ: 10ನೇ ಜೂನ್ 2008**

ಪ್ರೊ: ಕೆ.ವಿ. ರಾಜು ಪ್ರಾಧ್ಯಾಪಕರು, ಹಾಗೂ ಇಲಾಖಾ ಮುಖ್ಯಸ್ಥರು, ಸೆಂಟರ್ ಫಾರ್ ಎಕೋಲೋಜಿಕಲ್, ಎಕೋನೋಮಿಕ್ಸ್ ಮತ್ತು ನ್ಯಾಚ್ಯುರಲ್ ರಿಸೋರ್ಸಸ್, ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕೋನೋಮಿಕ್ಸ್ ಚೇಂಜ್, ಬೆಂಗಳೂರು ಇವರನ್ನು ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16ರ ಪ್ರಕಾರ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 492 ಸಅಸೇ 2008, ದಿನಾಂಕ:10–6–2008ರಲ್ಲಿ ಸೃಜಿಸಲಾದ ಮುಖ್ಯಮಂತ್ರಿಗಳ

ಆರ್ಥಿಕ ಸಲಹೆಗಾರರ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಇವರ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 716 **ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 140 ಸೇಇಮು 2007, ಬೆಂಗಳೂರು, ದಿನಾಂಕ: 11ನೇ ಜೂನ್ 2008**

ಶ್ರೀ ಎನ್. ಆರ್. ವಿಶುಕುಮಾರ್ ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಕಂಠೀರವ ಸ್ಟುಡಿಯೋ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 717 **ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 87 ಆಸೇವ 2008, ಬೆಂಗಳೂರು, ದಿನಾಂಕ: 7ನೇ ಜೂನ್ 2008**

ಶ್ರೀ ಮೊಹಮ್ಮದ್ ಮೆಹಮೂದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಪ್ರಸ್ತುತ ಕೊಪ್ಪಳ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಕೊಪ್ಪಳ ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮಾನ್ಯ ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ–3 ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 718 **ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 669 SAS 2008, Bangalore, Dated: 31st May 2008**

The services of Sri Subhash Chandra, IAS (KN-86) Secretary to Government, Urban Development Department (Municipalities & Urban Development Authorities), Bangalore are placed at the disposal of Government of India until further orders for appointment as Joint Secretary to Government of India, Department of Defence, on central deputation basis, Sri Subhash Chandra, IAS (KN-86) is relieved of the present post under the Government of Karnataka w.e.f. the afternoon of 5th June 2008, with instructions to join the new assignment with Government of India.

This issues in pursuance of the communication No/12/14/2008-EO(SM-I), dated 22.5.2008 from the Department of Personnel & Training Government of India

By Order and in the name of the Governor of Karnataka,

P.R. 719 **K.G. ANANTHA**

Under Secretary to Government,

Department of Personnel And Administrative Reforms

(Services-1)

**NOTIFICATION**

**No. DPAR 108 SPS 2008, Bangalore, Dated: 10th June 2008**

Sri R. Sri Kumar, IPS (KN 73) Director General of Police, and Chairman and Managing Director Karnataka State Police Housing Corporation Ltd., Bangalore in addition to his present duties is appointed with immediate effect and until further orders as Officer on Special Duty in charge of LAW & Order in the State.

By Order and in the name of the Governor of Karnataka,

P.R. 720

**K.G. ANANTHA**

Under Secretary to Government,

Department of Personnel And Administrative Reforms

(Services-1)

**NOTIFICATION**

**No. DPAR 263 SAS 2008, Bangalore, Dated: 11th June 2008**

Sri T. Sham Bhatt, IAS (KN-92) Commissioner, Religious and Charitable Endowment and E/o Secretary to Government, Revenue Department, Bangalore is transferred with immediate and his services are placed at the disposal of Commerce and Industries Department until further orders for being posted as Executive Member & Chief Executive Officer, Karnataka Industrial Area Development Board, Bangalore in the existing vacancy.

By Order and in the name of the Governor of Karnataka,

P.R. 721

**K.G. ANANTHA**

Under Secretary to Government,

Department of Personnel And Administrative Reforms

(Services-1)

**NOTIFICATION**

**No. DPAR 107 SPS 2008, Bangalore, Dated: 10th June 2008**

Sri A.R. Infant, IPS (KN 77) Additional Director General of Police, Karnataka State Reserve Police, Bangalore is transferred with immediate effect and posted until further orders as Additional Director General of Police, Law and Order, Bangalore in the existing vacancy.

Shri Kuchanna Srinivasan IPS (KN 78) waiting for posting is posted with immediate effect and until further orders as Additional Director General of Police, Karnataka State Reserve Police Bangalore vice Sri A.R. Infant, IPS transferred.

By Order and in the name of the Governor of Karnataka,

P.R. 722

**K.G. ANANTHA**

Under Secretary to Government,

Department of Personnel And Administrative Reforms

(Services-1)

**NOTIFICATION**

**No. DPAR 261 SAS 2008 (P), Bangalore, Dated: 10th June 2008**

Sri B. Shivappa, IAS (KN 98) Additional Director, Food and Civil Supplies & Consumer Affairs Department Bangalore is transferred with immediate effect and posted until further orders as Deputy Commissioner, Kolar District Kolar in the existing vacancy.

By Order and in the name of the Governor of Karnataka,

P.R. 723

**K.G. ANANTHA**

Under Secretary to Government,

Department of Personnel And Administrative Reforms

(Services-1)

**NOTIFICATION**

**No. DPAR 192 SME 2005, Bangalore, Dated: 9th June 2008**

Notification No. 24009/98/99-IPS II, dt:16-4-2008 of Government of India, Ministry of Home Affairs New Delhi is hereby republished:

[To be published in the Gazette of India: Part-I Section-II]

No.24009/98/99-IPS. II

Government of India/Bharat Sarkar

Ministry of Home Affairs/Grih Mantralaya

New Delhi, the 16th April 2008

**NOTIFICATION**

WHEREAS Smt. Savitha J. Dharmadhikari, IPS (KTK:90) proceeded on deputation to United Nations and Joined the post of Deputy Field Security Officer in Jakarta on 14-6-2002 on a fixed tenure of one year and her tenure was to end on 13-6-2003 The U.N. extended her term for two years up to 13-6-2005 This was approved by Government of India and again on the recommendation of the U.N. the tenure was extended up to 31-12-2005 and again it was last extended up to 30-6-2007;

AND WHEREAS the said Smt. Savitha J. Dharmadhikari, IPS was advised on 30-8-2007 to report back to her parent cadre i.e. Indian Police Service in the Karnataka Cadre forthwith by the cadre Authority;

AND WHEREAS the said Smt Savitha J. Dharmadhikari, IPS is continuing on deputation with United Nations unauthorisedly beyond 30-6-2007 and as such was issued with a Notice under the provisions of Rule 7 (2) (c) of the All India Services (Leave) Rules 1955, on 1st January, 2008 calling for her explanation as to why the provisions of the said rules should not be invoked in her case;

AND WHEREAS the said Smt Savitha J. Dharmadhikari, IPS received communication and submitted her representation through "E-Mail" wherein she had sought time till December, 2009 to join back in the parent cadre on the ground of completing her fresh contract with the U.N. which she had accepted in November, 2007;

And Whereas the representation of the said Smt Savitha J. Dharmadhikari, IPS was considered by the Competent Authority and took note of the fact that she had accepted the fresh contract with U.N. without the approval of the competent authority and that is also after she was intimated of the position that her approved tenure was over. However, the competent authority allowed her one month's time to join back in her parent cadre and the decision was communicated to her through "E-Mail" vide communication dated 6-2-2008 and she was also informed that she should report back to her cadre by 5th March 2008 It was also intimated to her that if she failed to comply with the directions, the Government of India would be at liberty to invoke the provisions of Rule 7(2)(c) of AIS (leave) Rules in her case, without further notice;

AND WHEREAS the said Smt Savitha J. Dharmadhikari, IPS., did not respond to the advice;

AND WHEREAS the matter was further considered by the Competent Authority and it was found desirable to invoke the provisions of rule 7(2) (c) ibid in her case in view of her continued unauthorized absence and ignoring this Ministry's directions;

AND NOW THEREFORE the President, in exercise of his powers conferred by the provisions of rule 7 (2)(c) of the All India Services (Leave )Rules, 1955, is pleased to treat Smt. Savitha J. Dharmadhikari, IPS (KTK:90) as deemed to have resiged from the Indian Police Service with effect from

the date of issue of this notification Smt Savitha J. Dharmadhikari, IPS(KTK:90) shall also stand relieved from the Indian Police Service from this date. It is notified accordingly.

For and on behalf of the President of India

**K. NATARAJAN**

Under Secretary to the Govt. of India.

TO:

The Manager,
Government of India Press,
Faridabad, Haryana.

---

By Order and in the name of the Governor of Karnataka,

P.R. 724

**ASHOK P. ATRE**

Under Secretary to Government,
Department of Personnel And Administrative Reforms
(Services-IV)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಮಮಇ 236 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 10ನೇ ಜೂನ್ 2008**

ಶ್ರೀ ಎಂ.ವಿ. ತಿಮ್ಮಯ್ಯ, ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ನಿಯೋಜನೆ ಮೇಲೆ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರಿಗೆ ಸಮಾಜ ಕಲ್ಯಾಣ ಇಲಾಖೆಯು ಆದೇಶ ಸಂಖ್ಯೆ:ಸಕಇ 142 ಪಕಸೇ 2008 ದಿ:27–5–2008ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285 (1)(ಎ) ರನ್ವಯ ದಿ:10–4–2008 ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿರುವ ಹಿನ್ನಲೆಯಲ್ಲಿ ಸದರಿಯವರ ಸೇವೆಯನ್ನು ದಿ:10–4–2008ರ ಅಪರಾಹ್ನದಿಂದಲೇ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಿಂದ ಬಿಡುಗಡೆಗೊಳಿಸಲಾಗಿದೆ. ಶ್ರೀ ಹೆಚ್. ಚಿತ್ತರಂಜನ್ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ, ಇವರನ್ನು ಮುಂದಿನ ಆದೇಶದವರೆಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಬೆಂಗಳೂರು ಹುದ್ದೆಯ ಹೆಚ್ಚಿನ ಪ್ರಭಾರದಲ್ಲಿರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 726

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ತಿದ್ದುಪಡಿ**

**ಸಂಖ್ಯೆ: ಮಮಇ 506 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 7ನೇ ಜೂನ್ 2008**

ಸರ್ಕಾರಿ ಅಧಿಸೂಚನೆ ದಿನಾಂಕ:14–5–2008 ರಲ್ಲಿ ಶ್ರೀ ವೆಂಕಟೇಶಯ್ಯ, ಸಂಶೋಧನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಧಾನ ಕಛೇರಿ, ಬೆಂಗಳೂರು, ಇವರಿಗೆ ಕಛೇರಿ ವ್ಯವಸ್ಥಾಪಕರು, ಪ್ರಧಾನ ಕಛೇರಿ, ಬೆಂಗಳೂರು ಇಲ್ಲಿಗೆ ನಿಯುಕ್ತಿಗೊಳಿಸಲಾಗಿದ್ದು. ಅದನ್ನು ಮಾರ್ಪಡಿಸಿ, ಶ್ರೀ ವೆಂಕಟೇಶಯ್ಯರವರನ್ನು ಸಂಶೋಧನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹುದ್ದೆಯಲ್ಲಿಯೇ ಮುಂದುವರೆಸಿ, ಶ್ರೀಮತಿ ಜಗನ್ಮೋಹಿನಿ. ಪರಿವೀಕ್ಷಣಾಧಿಕಾರಿ ದರ್ಜೆ–1 ಇವರನ್ನು ಕಛೇರಿ ವ್ಯವಸ್ಥಾಪಕರು, ಪ್ರಧಾನ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 727

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 369 ಪಿಪಿಇ 2007, ಬೆಂಗಳೂರು, ದಿನಾಂಕ: 5ನೇ ಜೂನ್ 2008**

ಶ್ರೀ ಎಸ್.ಪಿ. ಅಣ್ಣೇಗೌಡ, ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಂಗಳೂರು ಇವರಿಗೆ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ವೇತನ ಶ್ರೇಣಿಯ ರೂ. 20025–525–22650–600–26250–675–28275ರ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿ, ಬೆಂಗಳೂರು ಇಲ್ಲಿ ಅಭಿಯೋಗ ಜಂಟಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಸ್.ಟಿ. ಉದಪುಡಿ ಇವರು ರಜೆಯಲ್ಲಿ ತೆರಳಿರುವ ಹುದ್ದೆಗೆ ಒಂದು ದಿನದ ಮಟ್ಟಿಗೆ ನೇಮಿಸಿದೆ. ಮರುದಿನದಿಂದ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಕಛೇರಿಯಲ್ಲಿ ಖಾಲಿ ಇರುವ ಕಾನೂನು ಅಧಿಕಾರಿ ಹುದ್ದೆಗೆ ಮುಂದಿನ ಆದೇಶದವರೆಗೆ ನಿಯೋಜಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 728

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸ ಮತ್ತು ಅಭಿಯೋಗಗಳು)

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆನಾಸ 114 ಆಇಸೇ 2008, ಬೆಂಗಳೂರು, ದಿನಾಂಕ: 13ನೇ ಜೂನ್ 2008**

ಶ್ರೀ ಚನ್ನಪ್ಪಗೌಡ, ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಇವರು ದಿ:16–6–2008 ರಿಂದ 8–8–2008ರವರೆಗೆ ತರಬೇತಿಯಲ್ಲಿ ಭಾಗವಹಿಸುತ್ತಿರುವುದರಿಂದ, ಶ್ರೀ ಎಸ್.ಆರ್. ವೆಂಕಟೇಶ್, ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಅಧಿಕ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 730

**ಟಿ. ಪರಮೇಶ್ವರಪ್ಪ**
ಪೀಠಾಧಿಕಾರಿ, ಆಹಾರ–1 ಶಾಖೆ (ಪ್ರ),
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

**ಆರ್ಥಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಇ 36 ವಾತೆಸಿ 2008, ಬೆಂಗಳೂರು, ದಿನಾಂಕ: 26ನೇ ಮೇ 2008**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ವಾಣಿಜ್ಯ ತೆರಿಗೆ ಇಲಾಖೆಯ ಗ್ರೂಪ್ 'ಎ' ವೃಂದದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗೆ ಆಯ್ಕೆ ಮಾಡಿ, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: E(1)872/2007–08/PSC ದಿನಾಂಕ:10–1–2008ರ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ ಈ ಆಯ್ಕೆ ಪಟ್ಟಿಯನ್ವಯ ಈ ಕೆಳಕಂಡ ಅಭ್ಯರ್ಥಿಗಳನ್ನು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ರೂ "14050–350–14400–400–16800–450–19500–525–22650–600–25050" ರ ವೇತನ ಶ್ರೇಣಿಯ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗೆ ಪರಿವೀಕ್ಷಣೆ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

| ಕ್ರ.ಸಂ | ಹೆಸರು<br>ಶ್ರೀಮತಿ/ಶ್ರೀ | ವಿಳಾಸ |
|---|---|---|
| 1 | ನಾಗರಾಜರಾವ್ ಬಿ. | ನಂ. 193, 2ನೇ ಅಡ್ಡರಸ್ತೆ, 1ನೇ ಬ್ಲಾಕ್ ಕೋರಮಂಗಲ, ಬೆಂಗಳೂರು–560034 |
| 2 | ಬಾಲಸ್ವಾಮಿ ಟಿ. | ಪಿಎಸ್ಐ. ಫಾರೆಸ್ಟ್ ಸ್ಕಾಡ್,<br>ನೃಪತುಂಗ ಪೊಲೀಸ್ ಗೆಸ್ಟ್ ಹೌಸ್,<br>ಜರ್ಮನ್ ಹಾಸ್ಪಿಟಲ್ ಹತ್ತಿರ ಧಾರವಾಡ |

| 1 | 2 | 3 |
|---|---|---|
| 3 | ತೇಜಸ್ವಿನಿ ಎಸ್ | ನಂ. 313, 10ನೇ ಕ್ರಾಸ್ 3ನೇ ಮುಖ್ಯ ರಸ್ತೆ ಎ–1 ಬ್ಲಾಕ್, ವಿಜಯನಗರ, 3ನೇ ಹಂತ ಮೈಸೂರು–570017 |
| 4 | ಸಿದ್ದಲಿಂಗಯ್ಯ ಎಸ್. ಹಿರೇಮಠ | ಮಖಾನಪುರ ಪೋಸ್ಟ್ ಬಿಜಾಪುರ ಜಿಲ್ಲೆ–586119 |

ಈ ಎಲ್ಲಾ ಅಭ್ಯರ್ಥಿಗಳು ಎರಡು ವರ್ಷಗಳ ಅವಧಿಯಲ್ಲಿ ಪರೀಕ್ಷಾರ್ಥ ತರಬೇತಿಯಲ್ಲಿರುತ್ತಾರೆ. ಈ ಅವಧಿಯಲ್ಲಾದ 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವೆ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗಧಿಪಡಿಸಿರುವ ಕನ್ನಡ ಪರೀಕ್ಷೆ ಹಾಗೂ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಬೇಕು.

ಈ ಅಭ್ಯರ್ಥಿಗಳ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ಆದೇಶದ ಅಧೀನಕ್ಕೆ ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಗಳು ಆಯುಕ್ತರು, ವಾಣಿಜ್ಯ ತೆರಿಗೆಗಳ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು, ಇವರಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 731

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ–2)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂ.ಮಮಇ 48 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 16ನೇ ಮೇ 2008.**

ಕರ್ನಾಟಕ ಪತ್ರಾಂಕಿತ ಪರೀಕ್ಷಾರ್ಥಿಗಳ (ಗ್ರೂಪ್ ಎ ಮತ್ತು ಬಿ) ನಿಯಮಾವಳಿ 1966 ರ ಮೇರೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಆಯ್ಕೆಗೊಂಡ ಈ ಕೆಳಕಂಡ ಅಭ್ಯರ್ಥಿಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಪರಿವೀಕ್ಷಣಾಧಿಕಾರಿ ದರ್ಜೆ–1 ರ ಹುದ್ದೆಯಲ್ಲಿ (ವೇತನ ಶ್ರೇಣಿ ರೂ.11400–300–12300–350–14400–400–16800–450–19500–525–21600 ರಲ್ಲಿ ಎರಡು ವರ್ಷಗಳ ಪರೀಕ್ಷಾರ್ಥಿಯಾಗಿ ಹಾಗೂ ಕೆಳಕಾಣಿಸಿದ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕಾತಿ ಮಾಡಲಾಗಿದೆ:

| ಕ್ರ.ಸಂ. | ಹೆಸರು ಮತ್ತು ವಿಳಾಸ | ನಿಯುಕ್ತಿಗೊಳಿಸಿರುವ ಸ್ಥಳ |
|---|---|---|
| 1 | ಕುಮಾರಿ: ಮೋಹನ ಕುಮಾರಿ,<br>ಬಿನ್. ಕೆ.ಶಂಕರ್,<br>ನಂ–10, ಬ್ಲಾಕ್–28,<br>ಜೆ.ಎಸ್.ಎಸ್.ಲೇಔಟ್,<br>ಮೈಸೂರು – 570 012. | ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹುನಗುಂದ, ಬಿಜಾಪುರ ಜಿಲ್ಲೆ,<br>(ಖಾಲಿ ಹುದ್ದೆ ಜಾಗದಲ್ಲಿ) |
| 2 | ಶ್ರೀ ಬಿ. ಈರಾಸ್ವಾಮಿ,<br>ಬೆನ್ನಘಟ್ಟ ಗ್ರಾಮ,<br>ಡಿ.ಎನ್.ದೊಡ್ಡಿ ಅಂಚೆ,<br>ಮಾಲೂರು ತಾಲ್ಲೂಕು,<br>ಕೋಲಾರ ಜಿಲ್ಲೆ. | ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಗೌರಿಬಿದನೂರು,<br>ಚಿಕ್ಕಬಳ್ಳಾಪುರ ಜಿಲ್ಲೆ,<br>(ಖಾಲಿ ಹುದ್ದೆ ಜಾಗದಲ್ಲಿ) |
| 3 | ಕುಮಾರಿ: ಎಸ್.ಉಷಾ,<br>ನಂ–25, ಕೋಡಿಪಾಳ್ಯ,<br>ಮಾದಾವರ ಗ್ರಾಮ,<br>ದಾಸನಪುರ ಹೋಬಳಿ,<br>ಬೆಂಗಳೂರು ಉತ್ತರ ತಾಲ್ಲೂಕು,<br>ಬೆಂಗಳೂರು – 562 123. | ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಗಳೂರು, ದಾವಣಗೆರೆ ಜಿಲ್ಲೆ,<br>(ಖಾಲಿ ಹುದ್ದೆ ಜಾಗದಲ್ಲಿ) |

| ಕ್ರ.ಸಂ. | ಹೆಸರು ಮತ್ತು ವಿಳಾಸ | ನಿಯುಕ್ತಿಗೊಳಿಸಿರುವ ಸ್ಥಳ |
|---|---|---|
| 4 | ಶ್ರೀಮತಿ ಜಿ. ಪದ್ಮಾವತಿ,<br>ಬಿನ್. ಮಂಜುನಾಥ್,<br>ಪ್ರಸನ್ನ ನಿಲಯ, ತಾರಾದತ್ತಿ ಅಂಚೆ, ಕುಂದಾಪುರ ತಾಲ್ಲೂಕು,<br>ಉಡುಪಿ – 576 232. | ಇವರು ಹೆರಿಗೆ ಅವಧಿಯಲ್ಲಿದ್ದು,<br>ಎರಡು ತಿಂಗಳ ನಂತರ ವರದಿ ಮಾಡಿಕೊಳ್ಳುವುದಾಗಿ ತಿಳಿಸಿದ್ದಾರೆ. |

**ಷರತ್ತು ಮತ್ತು ನಿಬಂಧನೆಗಳು:–**

1. ಮೇಲ್ಕಂಡ ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಗಳ ಅಥವಾ ಆದೇಶಕ್ಕೊಳಪಟ್ಟಿರುತ್ತದೆ.
2. ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥಿ) 1977 ರ ನಿಯಮಾವಳಿಗೆ ಬದ್ಧರಾಗಿರತಕ್ಕದ್ದು.
3. ಪರೀಕ್ಷಾರ್ಥಿ ಅವಧಿಯಲ್ಲಿ ಅಭ್ಯರ್ಥಿಗಳು 1974 ರ ಕರ್ನಾಟಕ ನಾಗರಿಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿಯಲ್ಲಿ ಮೇಲ್ಕಂಡ ಹುದ್ದೆಗೆ ನಿಗಧಿಪಡಿಸಿರುವ ಕನ್ನಡ ಭಾಷೆ ಮತ್ತು ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು.
4. ಅಭ್ಯರ್ಥಿಗಳ ಜೇಷ್ಠತೆಯನ್ನು ಕರ್ನಾಟಕ ಲೋಕ ಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ರೂಪಿಸಿರುವ ಕ್ರಮ ಸಂಖ್ಯೆಯಂತೆ ಹಾಗೂ ನಿಯಮಾನುಸಾರ ಸರ್ಕಾರ ಆಗಿಂದಾಗ್ಗೆ ಹೊರಡಿಸುವ ಆದೇಶಗಳನ್ವಯ ನಿರ್ಧರಿಸಲಾಗುವುದು.
5. ಮೇಲ್ಕಂಡ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರುಗಳ ಮೂಲಕ ಅಂಕಪಟ್ಟಿ ಪದವಿ ಪ್ರಮಾಣ ಪತ್ರ, ಜನ್ಮ ದಿನಾಂಕ ಮೀಸಲಾತಿ ಪ್ರಮಾಣ ಪತ್ರ ಹಾಗೂ ಇತರ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು, ಹಾಗೂ ನೇಮಕಾತಿ ಆದೇಶ ತಲುಪಿದ 15 ದಿನಗಳ ಒಳಗೆ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಎದುರಿಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.
6. ಆಯ್ಕೆಯಾಗಿರುವ 'ಬಿ' ಗುಂಪಿನ ಅಭ್ಯರ್ಥಿಗಳ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 729–730/99 ರ ಹಾಗೂ 722/99 ಮೇಲಿನ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
7. ಅಭ್ಯರ್ಥಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಹಾಯಕ ನಿರ್ದೇಶಕರುಗಳಿಗೆ ಹೊಂದಿಕೊಂಡಂತೆ ಕ್ಷೇತ್ರ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸತಕ್ಕದ್ದು ಮತ್ತು ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ನೀಡುವ ನಿರ್ದೇಶನದ ಮೇರೆಗೆ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸತಕ್ಕದ್ದು.
8. ಜಿಲ್ಲೆಗಳ ಸಹಾಯಕ ನಿರ್ದೇಶಕರುಗಳ ಬಳಿ ಜಿಲ್ಲಾ ತರಬೇತಿಗೆ ಸಂಬಂಧಪಟ್ಟಂತೆ ತರಬೇತಿ ಕಾರ್ಯಕ್ರಮಗಳನ್ನು ಹಾಗೂ ರಾಜ್ಯ ಮಟ್ಟದಲ್ಲಿನ ಇಲಾಖೆಯ ಇತರೆ ಇಲಾಖೆಗಳು:ಸಂಸ್ಥೆಗಳ ಕಾರ್ಯನಿರ್ವಹಣೆ ಹಾಗೂ ಯೋಜನೆಗಳ ಬಗ್ಗೆ ಮತ್ತು ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇಲ್ಲಿನ ತರಬೇತಿ ಬಗ್ಗೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ರೂಪಿಸುವರು.
9. ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಜಾತಿ ಪರಿಶೀಲನಾ ಧೃಡೀಕರಣ ಪತ್ರಗಳನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಮತ್ತೊಮ್ಮೆ ಪರಿಶೀಲಿಸತಕ್ಕದ್ದು.
10. ಶ್ರೀಮತಿ ಜಿ.ಪದ್ಮಾವತಿ (ಕ್ರಮ ಸಂಖ್ಯೆ 4) ರವರ ರಜೆ ಮುಗಿದ ನಂತರ ಪ್ರತ್ಯೇಕ ಸ್ಥಳ ನಿಯುಕ್ತಿ ಆದೇಶ ಹೊರಡಿಸುವುದು.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 674

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**HIGH COURT OF KARNATAKA**

**NOTIFICATION**

**No.RPS.117/2004, Bangalore, : Dated 4TH June 2008.**

In exercise of the powers under Section 51 (3) of the State Re-organisation Act 1956 and with the approval of His Excellency the Governor of Karnataka, the Hon'ble Chief Justice, High Court of

Karnataka, vide Notification dated 19.10.2004, was pleased to notify sittings of Judges and Division Courts of the High Court of Karnataka at Dharwad and Gulbarga. It was stated in the Notification dated 19.10.2004 that the date of sitting will be notified later.

The Full Court of the High Court of Karnataka, vide Resolution dated 03.06.2008, has resolved to commence sitting of Judges and Division Courts at the Circuit Benches at Dharwad and Gulbarga on 07.07.2008. The Full Court has also resolved that cases arising from the Districts of Bagalkot, Bellary, Belgaum, Dharwad, Gadag, Haveri, Uttara Kannada – Karwar and Koppal will be heard and decided at the Circuit Bench at Dharwad and cases arising from the Districts of Bidar, Bijapur, Gulbarga and Raichur will be heard and decided at the Circuit Bench at Gulbarga. It has been further resolved that pending cases from the above mentioned districts will be transferred to the respective Circuit Bench before 07.07.2008 and that filing of new cases at the Circuit Benches will be permitted from 07.07.2008.

In the above circumstances, the Hon'ble Chief Justice, High Court of Karnataka has been pleased to order that sitting of Judges and Division Courts at the Circuit Benches at Dharwad and Gulbarga will commence on 07.07.2008; that cases arising from the districts of Bagalkot, Bellary, Belgaum, Dharwad, Gadag, Haveri, Uttara Kannada – Karwar and Koppal will be heard and decided at the Circuit Bench at Dharwad; that cases arising from the Districts of Bidar, Bijapur, Gulbarga and Raichur will be heard and decided at the Circuit Bench at Gulbarga; that pending cases from the above mentioned districts will be transferred to the respective Circuit Bench before 07.07.2008 and that filing of new cases at the Circuit Benches will be permitted from 07.07.2008.

By Order of the Hon'ble Chief Justice,

**R.B.BUDIHAL**

Registrar General,

**HIGH COURT OF KARNATAKA**

**NOTIFICATION**

**No.RPS.117/2004, Bangalore, Dated: 10th June 2008.**

In partial modification of the Notification of even number dated 4th June 2008, it is hereby notified that even after the commencement of the Circuit Benches at Dharwad and Gulbarga, Public Interest Litigations (PILs), Company Petitions, Company Applications and Company Appeals arising from any of the Districts in the State of Karnataka shall continue to be filed, heard and decided at the Principal Bench of the High Court at Bangalore.

It is further notified that the notification dated 4th June 2008 shall not affect the power of the Hon'ble Chief Justice to withdraw any case from any Circuit Bench and to assign the same to any of the courts at the Principal Bench at Bangalore or to transfer any case from the Principal Bench to any Circuit Bench.

P.R. 729

By Order of the Hon'ble Chief Justice,

**R.B.BUDIHAL**

Registrar General,

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ.ಆಇ 35 ವಾತೆಸಿ 2008, ಬೆಂಗಳೂರು, ದಿನಾಂಕ: 28ನೇ ಮೇ 2008.**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ವಾಣಿಜ್ಯ ತೆರಿಗೆ ಇಲಾಖೆಯ ಗ್ರೂಪ್ 'ಬಿ' ವೃಂದದ ವಾಣಿಜ್ಯ ತೆರಿಗೆ ಅಧಿಕಾರಿ ಹುದ್ದೆಗೆ ಆಯ್ಕೆ ಮಾಡಿ, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ : E(1)872/2007–08/PSC ದಿನಾಂಕ:10–1–2008ರ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ ಈ ಆಯ್ಕೆ ಪಟ್ಟಿಯನ್ವಯ ಈ ಕೆಳಕಂಡ ಅಭ್ಯರ್ಥಿಗಳನ್ನು ವಾಣಿಜ್ಯ ತೆರಿಗೆ

ಇಲಾಖೆಯಲ್ಲಿ ರೂ "1400–300–12300–350–14400–400–16800–450–19500–525–21600" ರ ವೇತನ ಶ್ರೇಣಿಯ ವಾಣಿಜ್ಯ ತೆರಿಗೆ ಅಧಿಕಾರಿ ಹುದ್ದೆಗೆ ಪರಿವೀಕ್ಷಣೆ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

| ಕ್ರ.ಸಂ | ಹೆಸರು<br>ಶ್ರೀಮತಿ/ಶ್ರೀ | ವಿಳಾಸ |
|---|---|---|
| 1 | ದಿನೇಶ್ ಕುಮಾರ್ ಜಿ.ಟಿ | ನಂ 449, 1ನೇ ಮಹಡಿ, 5ನೇ ಮೈನ್, ವಿನಾಯಕ ಲೇಔಟ್, ನಾಗರಬಾವಿ, ಬೆಂಗಳೂರು–560072 |
| 2 | ನಂದೀಶ್ ಎಂ.ಎ. | ಚೊಟ್ಟನಹಳ್ಳಿ ಕೋಣಸಾಲೆ ಪೋಸ್ಟ್<br>ಮದ್ದೂರು ತಾಲ್ಲೂಕು,<br>ಮಂಡ್ಯ ಜಿಲ್ಲೆ–571419 |
| 3 | ಮಹದೇವ ಸಿ. | ಸಹಾಯಕ ಶಿಕ್ಷಕ, ಸರ್ಕಾರಿ ಪ್ರೌಢ ಶಾಲೆ,<br>ಮಾಸ್ತೇನಳ್ಳಿ, ವೆಲಗಲಬುರೆ ಪೋಸ್ಟ್ ಶ್ರೀನಿವಾಸಪುರ ತಾಲ್ಲೂಕು<br>ಕೋಲಾರ ಜಿಲ್ಲೆ–563126 |
| 4 | ರವಿ ಎನ್ | ಬಂಡಿಗೌಡನಹಳ್ಳಿ ಬಿಸಲವಾಡಿ ಪೋಸ್ಟ್,<br>ಹರದನಹಳ್ಳಿ ಹೋಬಳಿ,<br>ಚಾಮರಾಜನಗರ ತಾಲ್ಲೂಕು & ಜಿಲ್ಲೆ– 571127 |
| 5 | ಸೋಮಶೇಖರ್ | ಹೊದಲೂರು, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ–572223 |
| 6 | ಚಂದ್ರಮೌಳಿ ಜೆ. | ನಂ. 9, 7ನೇ ಕ್ರಾಸ್, ಮಹದೇಶ್ವರ ನಗರ,<br>ವಿಜಯನಗರ, 2ನೇ ಹಂತ, ಮೈಸೂರು–570016. |
| 7 | ಶುಭ ಎನ್.ಕೆ | ಶಿವ ಸದನ, 3ನೇ ಮೈನ್ ಬಸವೇಶ್ವರ ಲೇಔಟ್,<br>ಬಿ.ಟಿ.ಎಸ್. ಗ್ಯಾರೇಜ್ ಹತ್ತಿರ, ವಿಜಯನಗರ, ಬೆಂಗಳೂರು–560040 |
| 8 | ಹಸೀಬುಲ್ಲಾ ಬೇಗ್ ಆರ್. | ನಂ. 7/281 ಉಸ್ಮಾನ್ ಬೇಗ್ ಮಂಜಿಲ್<br>ಎ.ಪಿ.ಎಂ.ಸಿ ಲಯನ್ಸ್ ಸ್ಕೂಲ್ ರೋಡ್ ಹತ್ತಿರ,<br>ಕೊಳ್ಳೇಗಾಲ ಟೌನ್, ಚಾಮರಾಜನಗರ ಜಿಲ್ಲೆ–5711440 |
| 9 | ಮಂಜುನಾಥ ಹೆಚ್.ಎಸ್. | ನಂ. 01, ಜನತಾ ಕಾಲೋನಿ ಹೊಸರಾಮನಹಳ್ಳಿ<br>ಗ್ರಾಮ, ಬೋಳನಹಳ್ಳಿ ಪೋಸ್ಟ್, ಹುಣಸೂರು<br>ತಾಲ್ಲೂಕು, ಮೈಸೂರು ಜಿಲ್ಲೆ–571103. |

ಈ ಎಲ್ಲಾ ಅಭ್ಯರ್ಥಿಗಳು ಎರಡು ವರ್ಷಗಳ ಅವಧಿಯಲ್ಲಿ ಪರೀಕ್ಷಾರ್ಥ ತರಬೇತಿಯಲ್ಲಿರುತ್ತಾರೆ. ಈ ಅವಧಿಯಲ್ಲಾದ 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವೆ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗಧಿಪಡಿಸಿರುವ ಕನ್ನಡ ಪರೀಕ್ಷೆ ಹಾಗೂ ವಾಣಿಜ್ಯ ತೆರಿಗೆ ಅಧಿಕಾರಿ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಬೇಕು.

ಈ ಅಭ್ಯರ್ಥಿಗಳ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ಆದೇಶದ ಅಧೀನಕ್ಕೆ ಒಳಪಟ್ಟಿರುತ್ತದೆ.

ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಗಳು ಆಯುಕ್ತರು, ವಾಣಿಜ್ಯ ತೆರಿಗೆಗಳ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು, ಇವರಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 732

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ–2)